# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು | : ಶ್ರೀ ಶಶೀಲ್ ಜಿ. ನಮೋಶಿ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1263 |
| ಉತ್ತರಿಸಬೇಕಾದ ದಿನಾಂಕ | : 08-03-2022 |
| ಉತ್ತರಿಸಬೇಕಾದ ಸಚಿವರು | : ಸಹಕಾರ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ರೈತರಿಗಾಗಿ ಇರುವ ವಿವಿಧ ಸಾಲ ಯೋಜನೆಗಳಾವವು; (ಈ ಸಾಲ ಯೋಜನೆಯ ನಿಯಮಗಳ ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ರೈತರಿಗಾಗಿ ಇರುವ ವಿವಿಧ ಸಾಲ ಯೋಜನೆಗಳು ಹಾಗೂ ನಿಯಮಗಳ ಸಂಪೂರ್ಣ ಮಾಹಿತಿ ಕೆಳಗಿನಂತಿದೆ.<br>**1. ಕುಟುಂಬಕ್ಕೆ ರೂ.3.00 ಲಕ್ಷಗಳವರೆಗೆ ಶೂನ್ಯ ಬಡ್ಡಿ ದರದಲ್ಲಿ ಅಲ್ಪಾವಧಿ ಬೆಳೆ ಸಾಲ ಮತ್ತು ಪಶುಸಂಗೋಪನೆ/ಮೀನುಗಾರಿಕೆ ಉದ್ದೇಶಗಳಿಗೆ ದುಡಿಯುವ ಬಂಡವಾಳವಾಗಿ ರೂ.2.00 ಲಕ್ಷಗಳವರೆಗೆ ಶೂನ್ಯ ಬಡ್ಡಿದರದ ಸಾಲದ ಯೋಜನೆ:-** |
| ಆ) | ಈ ಯೋಜನೆಗಳಲ್ಲಿ ಸಹಾಯಧನ (ಸಬ್ಸಿಡಿ) ಹೊಂದಿದ ಯೋಜನೆಗಳಾವವು; ಈ ಯೊಜನೆಗಳ ರೂಪುರೇಷೆಗಳೇನು; (ಮಾಹಿತಿ ನೀಡುವುದು) | • ಈ ಯೋಜನೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಪಿಕಾರ್ಡ್ ಬ್ಯಾಂಕ್ ಅಥವಾ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳಲ್ಲಿ ರೈತನು ಪಡೆದ ಬೆಳೆ ಸಾಲ/ಹೈನುಗಾರಿಕೆ/ ಮೀನುಗಾರಿಕೆ ಸಾಲಗಳಿಗೆ ಅನ್ವಯವಾಗುತ್ತದೆ.<br>• ಈ ಯೋಜನೆಯು ಒಬ್ಬ ಫಲಾನುಭವಿಗೆ ಗರಿಷ್ಠ ರೂ.2.00 ಲಕ್ಷಗಳಿಗೆ ನೀಡಿದ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ. ಒಂದು ಕುಟುಂಬಕ್ಕೆ ಬೆಳೆ ಸಾಲ, ಪಶುಸಂಗೋಪನೆ ಮತ್ತು ಮೀನುಗಾರಿಕೆ ದುಡಿಯುವ ಬಂಡವಾಳದ ಸಾಲ ಒಟ್ಟು ಸೇರಿ ರೂ.3.00 ಲಕ್ಷಗಳಿಗೆ ಮೀರತಕ್ಕದ್ದಲ್ಲ.<br>• ಬಡ್ಡಿ ಸಹಾಯಧನ ಜಿಲ್ಲಾ ಮಟ್ಟದ ತಾಂತ್ರಿಕ ಸಮಿತಿ ನಿಗದಿಪಡಿಸಿದ ಸ್ಕೇಲ್ ಆಫ್ ಫೈನಾನ್ಸ್ ಗೆ ಮಾತ್ರ ಲಭಿಸುತ್ತದೆ.<br>• ರೈತನು ಸಂಘವು ನಿಗದಿಪಡಿಸಿದ ಗಡುವಿನ ದಿನಾಂಕದೊಳಗೆ ಅಸಲು ಮರುಪಾವತಿಸಬೇಕು.<br>• ರೈತರಿಗೆ ಸಾಲ ಮತ್ತು ಸಹಾಯಧನವನ್ನು ಅವರು ಡಿಸಿಸಿ ಬ್ಯಾಂಕ್ ಹಾಗೂ ವಾಣಿಜ್ಯ ಬ್ಯಾಂಕ್ ನಲ್ಲಿ ಹೊಂದಿರುವ ಉಳಿತಾಯ ಖಾತೆ ಮೂಲಕವೇ ವಿತರಿಸತಕ್ಕದ್ದು, ಸಾಲ |

| | | |
|---|---|---|
| | | ಮತ್ತು ಸಹಾಯಧನವನ್ನು ಸಂಘಗಳ ಹಂತದಲ್ಲಿ ನಗದು ಮೂಲಕ ಪಾವತಿಸುವುದನ್ನು ನಿರ್ಬಂಧಿಸಲಾಗಿದೆ. |
| | | **2. ಕುಟುಂಬಕ್ಕೆ ರೂ.10.00 ಲಕ್ಷಗಳವರೆಗೆ ಮಧ್ಯಮಾವಧಿ/ದೀರ್ಘಾವಧಿ ಕೃಷಿ ಸಾಲಗಳನ್ನು ಶೇಕಡಾ 3 ರ ಬಡ್ಡಿ ದರದಲ್ಲಿ ವಿತರಿಸುವ ಯೋಜನೆ:**<br>• ಈ ಯೋಜನೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಪಿಕಾರ್ಡ್ ಬ್ಯಾಂಕ್ ಅಥವಾ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳಲ್ಲಿ ರೈತನು ಪಡೆದ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಹಾಗೂ ಕೃಷಿ ಸಂಬಂಧಿತ ಸಾಲಗಳಿಗೆ ಅನ್ವಯವಾಗುತ್ತದೆ.<br>• ನಬಾರ್ಡ್ ಗುರುತಿಸಿದ ಕೃಷಿ/ಕೃಷಿ ಸಂಬಂಧಿತ ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳ ಪೈಕಿ ಲಘು ನೀರಾವರಿ, ಭೂ–ಅಭಿವೃದ್ಧಿ, ಕೃಷಿ ಯಾಂತ್ರೀಕರಣ, ಪ್ಲಾಂಟೇಷನ್ ಹಾಗೂ ತೋಟಗಾರಿಕೆ ಅಭಿವೃದ್ಧಿ, ಸಾವಯವ ಕೃಷಿ, ಪಶುಸಂಗೋಪನೆ ಹಾಗೂ ಹೈನುಗಾರಿಕೆ, ಮೀನು ಕೃಷಿ, ರೇಷ್ಮೆ ಕೃಷಿ, ಜೇನು ಸಾಕಾಣಿಕೆ ಉದ್ದೇಶಗಳಿಗೆ ರೈತರಿಗೆ ನೀಡಲಾಗುವ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ.<br>• ದ್ವಿಚಕ್ರ ವಾಹನ, ಜೀಪು, ಪಿಕಪ್ ವ್ಯಾನ್ ಹಾಗೂ ಇನ್ನು ಮುಂತಾದ ಯಾವುದೇ ಕೃಷಿ ಸಾಗಾಣಿಕೆಗೆ ಬಳಸುವ ವಾಹನ ಸಾಲಗಳಿಗೆ, ತೋಟದ ಮನೆ, ಗ್ರಾಮೀಣ ಗೋದಾಮುಗಳಿಗೆ, ದ್ವಿತೀಯ ಸಂಸ್ಕರಣೆ, ಕೃಷಿ ಉತ್ಪನ್ನಗಳ ಮೌಲ್ಯವರ್ಧನೆ/ ಆಹಾರ ಸಂಸ್ಕರಣೆ, ಕೃಷಿ ಕ್ಲಿನಿಕ್‌ಗೆ ನೀಡುವ ಸಾಲಗಳಿಗೆ ಈ ಯೋಜನೆ ಅನ್ವಯವಾಗುವುದಿಲ್ಲ<br>• ರೈತನು ಸಂಘವು ನಿಗದಿಪಡಿಸಿದ ಗಡುವಿನ ದಿನಾಂಕದೊಳಗೆ ಅಸಲು ಮತ್ತು ಶೇ.3 ರ ಬಡ್ಡಿ ದರದಲ್ಲಿ ಮರುಪಾವತಿಸಬೇಕು. |
| ಇ) | ಈ ಸಾಲ ಯೋಜನೆಯ ಲಾಭ ಪಡೆಯಲು ರೈತರು ಅನುಸರಿಸಬೇಕಾದ ನಿಯಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಈ ಸಾಲ ಯೋಜನೆಯ ಲಾಭ ಪಡೆಯಲು ರೈತರು ಅನುಸರಿಸಬೇಕಾಗಿರುವ ನಿಯಮಗಳು ಈ ಕೆಳಕಂಡಂತಿದೆ.<br>1. ರೈತರು ತಮ್ಮ ಸಾಲದ ಖಾತೆಗಳಲ್ಲಿ ತಪ್ಪದೇ ಆಧಾರ್ ಕಾರ್ಡ್‌ನ ನಕಲು ಪ್ರತಿಯನ್ನು ನೀಡುವುದರೊಂದಿಗೆ ಆಧಾರ್ ಕಾರ್ಡ್ ಬಳಕೆಯ ಘೋಷಣಾ ಪತ್ರವನ್ನು ನೀಡತಕ್ಕದ್ದು. |

| | | |
|---|---|---|
| | | 2. ರೈತನು ಎರಡು ಸಂಘದ ಕಾರ್ಯವ್ಯಾಪ್ತಿಯಲ್ಲಿ ಭೂಮಿಯನ್ನು ಹೊಂದಿದ್ದರೆ ಆದ್ಯತೆಯ ಮೇರೆಗೆ ರೈತನು ವಾಸಿಸುವ ವ್ಯಾಪ್ತಿಯ ಸಂಘದಲ್ಲಿ ಪಡೆದ ಸಾಲಗಳಿಗೆ ಮೊದಲು ಪಾವತಿಸಿ, ರೂ.3.00 ಲಕ್ಷದ ಮಿತಿಯಲ್ಲಿ ಇತರೆ ಸಂಘದ ವ್ಯಾಪ್ತಿಯಲ್ಲಿ ಪಡೆದ ಸಾಲಗಳಿಗೆ ಸಹಾಯಧನ ವಿತರಿಸತಕ್ಕದ್ದು,<br>3. ನಿಗದಿಪಡಿಸಿದ ಗಡುವು ದಿನಾಂಕದೊಳಗೆ ರೈತರು ಸಾಲ ಮರುಪಾವತಿಸಿದಲ್ಲಿ ಮಾತ್ರ ಕೇಂದ್ರ ಸರ್ಕಾರ ನೀಡುವ ಶೇ.3 ರ ಪ್ರೋತ್ಸಾಹಧನ ಹಾಗೂ ರಾಜ್ಯ ಸರ್ಕಾರದಿಂದ ನೀಡುವ ಶೇ.4 ರ ಬಡ್ಡಿ ಸಹಾಯಧನಕ್ಕೆ ಅರ್ಹರಾಗುತ್ತಾರೆ. |
| ಈ) | ರೈತರಿಗಾಗಿ ವಾಹನ ಸಾಲ ಯೋಜನೆ ಜಾರಿಯಲ್ಲಿದೆಯೇ; | ಇಲ್ಲ. |
| ಉ) | ಹಾಗಿದ್ದಲ್ಲಿ, ಯಾವ ಯಾವ ವಾಹನಗಳಿಗೆ ಸಾಲ ನೀಡಲಾಗುತ್ತಿದೆ; ವಾಹನ ಸಾಲ ಯೋಜನೆಯಲ್ಲಿ ಸಬ್ಸಿಡಿ ನೀಡಲಾಗುತ್ತಿದೆಯೇ? (ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ. |

**ಸಂಖ್ಯೆ : ಸಿಓ 85 ಸಿಎಲ್‌ಎಸ್ 2022**

(ಎಸ್. ಟಿ. ಸೋಮಶೇಖರ್)

ಸಹಕಾರ ಸಚಿವರು